

# ಕರ್ನಾಟಕ ವಿಧಾನ ಸಭೆ

**(ಹದಿನಾಲ್ಕನೇ ವಿಧಾನ ಸಭೆ)**

**ಹದಿನಾಲ್ಕನೇ ಅಧಿವೇಶನ**

## ಲಘು ಪ್ರಕಟಣೆ ಭಾಗ-2

**(ಸಾಂಸದಿಕ ಹಾಗೂ ಇತರೆ ವಿಷಯಗಳಿಗೆ ಸಂಬಂಧಿಸಿದ ಸಾಮಾನ್ಯ ಮಾಹಿತಿ)**

**ಶುಕ್ರವಾರ, 26ನೇ ಮೇ, 2017**

---

**ಸಂಖ್ಯೆ: 303**

## ವಿಧಾನ ಸಭೆಯ ಉಪವೇಶನಗಳು

ಕರ್ನಾಟಕ ವಿಧಾನ ಸಭೆಯು ಸೋಮವಾರ, ದಿನಾಂಕ 5ನೇ ಜೂನ್, 2017ರಂದು ಬೆಳಿಗ್ಗೆ 11.30 ಗಂಟೆಗೆ ಬೆಂಗಳೂರಿನ ವಿಧಾನ ಸೌಧದಲ್ಲಿರುವ ವಿಧಾನ ಸಭೆಯ ಸಭಾಂಗಣದಲ್ಲಿ ಸೇರಲಿದೆ.

14ನೇ ವಿಧಾನ ಸಭೆಯ 14ನೇ ಅಧಿವೇಶನದ ಕಾರ್ಯಕಲಾಪಗಳನ್ನು ಈ ಕೆಳಕಂಡ ದಿನಾಂಕಗಳಂದು ನಡೆಸಲು ನಿಗದಿಪಡಿಸಲಾಗಿದೆ:-

**ದಿನಾಂಕ: 5, 6, 7, 8, 9, 12, 13, 14, 15 ಹಾಗೂ 16ನೇ ಜೂನ್, 2017.**

### 1. ಪ್ರಶ್ನೆಗಳು

**(ನಿಯಮ 42 ಮತ್ತು 45)**

ಈ ಲಘು ಪ್ರಕಟಣೆಗೆ ಲಗತ್ತಿಸಿರುವ **ಅನುಬಂಧ-1 ಮತ್ತು 2**ರಲ್ಲಿ ನಮೂದಿಸಿರುವ ಷರತ್ತುಗಳಿಗೆ ಒಳಪಟ್ಟು ಸಾರ್ವಜನಿಕ ಹಿತದೃಷ್ಟಿಯ ಪ್ರಶ್ನೆಗಳನ್ನು ನೀಡಲು ಮಾನ್ಯ ಶಾಸಕರಿಗೆ ಅವಕಾಶವಿರುತ್ತದೆ.

ಕರ್ನಾಟಕ ವಿಧಾನ ಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಯ ನಿಯಮಾವಳಿಗೆ ಇತ್ತೀಚಿಗೆ ತಂದ ತಿದ್ದುಪಡಿಯಂತೆ, ಅಧಿವೇಶನದ ನಡುವಿನ ಅವಧಿಯಲ್ಲಿ ಮಾನ್ಯ ಶಾಸಕರು ನೀಡಿರುವ ಪ್ರಶ್ನೆಗಳನ್ನು ಮೇಲಿನ ಉಪವೇಶನಕ್ಕೆ ಪರಿಗಣಿಸಲಾಗುವುದು. ಆ ಪ್ರಶ್ನೆಗಳೂ ಒಳಗೊಂಡಂತೆ, ದಿನವೊಂದಕ್ಕೆ ಗರಿಷ್ಠ ಐದು (5) ಪ್ರಶ್ನೆಗಳನ್ನು ನೀಡಲು ಮಾನ್ಯ ಶಾಸಕರಿಗೆ ಅವಕಾಶವಿರುತ್ತದೆ.

ಪ್ರಶ್ನೆಗಳ ಸೂಚನಾ ಪತ್ರಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ಹಾಗೂ ಬ್ಯಾಲೆಟ್ ನಡೆಸುವ ದಿನಾಂಕಗಳ ವಿವರಗಳು ಕೆಳಕಂಡಂತಿವೆ:

| ಪಟ್ಟಿ ಸಂಖ್ಯೆ | ಉಪವೇಶನದ ದಿನಾಂಕ | ಸಮೂಹ | ಪ್ರಶ್ನೆಗಳ ಸೂಚನಾ ಪತ್ರಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | ಪ್ರಶ್ನೆಗಳ ಸೂಚನಾ ಪತ್ರಗಳ ಬ್ಯಾಲೆಟ್ ನಡೆಸುವ ದಿನಾಂಕ | ಬ್ಯಾಲೆಟ್ ನಡೆಯುವ ಸ್ಥಳ ಮತ್ತು ಸಮಯ |
|---|---|---|---|---|---|
| 01 | 05.06.2017 (ಸೋಮವಾರ) | ಅ-A | 29.05.2017 | 31.05.2017 | **ಕಾರ್ಯದರ್ಶಿಯವರ ಕೊಠಡಿ** ಕೊಠಡಿ ಸಂಖ್ಯೆ: 121, ಮೊದಲನೇ ಮಹಡಿ, ವಿಧಾನ ಸೌಧ, **ಸಮಯ: ಮಧ್ಯಾಹ್ನ 3.00 ಗಂಟೆಗೆ** |
| 02 | 06.06.2017 (ಮಂಗಳವಾರ) | ಆ-B | 29.05.2017 | 31.05.2017 | |
| 03 | 07.06.2017 (ಬುಧವಾರ) | ಇ-C | 30.05.2017 | 01.06.2017 | |
| 04 | 08.06.2017 (ಗುರುವಾರ) | ಈ-D | 30.05.2017 | 02.06.2017 | |
| 05 | 09.06.2017 (ಶುಕ್ರವಾರ) | ಉ-E | 31.05.2017 | 03.06.2017 | |
| 06 | 12.06.2017 (ಸೋಮವಾರ) | ಅ-A | 01.06.2017 | 05.06.2017 | |
| 07 | 13.06.2017 (ಮಂಗಳವಾರ) | ಆ-B | 02.06.2017 | 06.06.2017 | |
| 08 | 14.06.2017 (ಬುಧವಾರ) | ಇ-C | 03.06.2017 | 07.06.2017 | |
| 09 | 15.06.2017 (ಗುರುವಾರ) | ಈ-D | 05.06.2017 | 08.06.2017 | |
| 10 | 16.06.2017 (ಶುಕ್ರವಾರ) | ಉ-E | 06.06.2017 | 09.06.2017 | |

ಪ್ರಶ್ನೆಗಳಿಗೆ ಸಂಬಂಧಿಸಿದ ಸಮೂಹ, ಪ್ರಶ್ನೆಗಳಿಗೆ ಉತ್ತರ ನೀಡುವ ದಿನಾಂಕ, ಸಂಬಂಧಿಸಿದ ಮಂತ್ರಿಗಳು ಮತ್ತು ಇಲಾಖೆಗಳ ವಿವರಗಳನ್ನು **ಅನುಬಂಧ-3ರಲ್ಲಿ** ನೀಡಿದೆ.

**ನಿಯಮ 39ರ ಮೇರೆಗೆ ಪ್ರಶ್ನೆಗಳನ್ನು ನೀಡಲು ಇರುವ 15 ದಿನಗಳ ಕಾಲಾವಕಾಶವನ್ನು ಮತ್ತು ನಿಯಮ 41ರ ಮೇರೆಗೆ ಉತ್ತರಗಳನ್ನು ಒದಗಿಸಲು ಇರುವ 10 ದಿನಗಳ ಕಾಲಾವಕಾಶವನ್ನು ಪ್ರಸ್ತುತ ಅಧಿವೇಶನದ ಪ್ರಶ್ನೋತ್ತರ ದಿನಾಂಕಗಳ ಅವಧಿಗೆ ಮಾತ್ರ ಕಡಿತಗೊಳಿಸಲಾಗಿರುತ್ತದೆ.**

## 2. ಅರ್ಧ ಗಂಟೆ ಕಾಲಾವಧಿ ಚರ್ಚೆ
## (ನಿಯಮ 59)

ಶಾಸಕರ ಪ್ರಶ್ನೆಗಳಿಗೆ ಸದನದಲ್ಲಿ ಉತ್ತರಿಸಿದ ಅಥವಾ ಮಂಡನೆ ಮಾಡಿದ ಉತ್ತರಗಳಿಂದ ಉದ್ಭವಿಸಿದ ವಿಷಯಗಳನ್ನು ಚರ್ಚಿಸುವ ಸಲುವಾಗಿ ಅಥವಾ ಉತ್ತರಗಳ ಸಂಬಂಧ ಮತ್ತಷ್ಟು ವಿವರಣೆಯನ್ನು ಸರ್ಕಾರದಿಂದ ಅಪೇಕ್ಷೆ ಪಡುವ ಸಲುವಾಗಿ ಮಾನ್ಯ ಶಾಸಕರು ಅರ್ಧ ಗಂಟೆ ಕಾಲಾವಧಿ ಚರ್ಚೆಯ ಸೂಚನೆಗಳನ್ನು ನೀಡಲು ಅವಕಾಶವಿರುತ್ತದೆ. ***(ಈ ಸೂಚನೆಗಳ ಮೇಲೆ, ವಾರದಲ್ಲಿ ಎರಡು ದಿನ ಅಂದರೆ ಮಂಗಳವಾರ ಮತ್ತು ಗುರುವಾರಗಳಂದು ಚರ್ಚೆ ನಡೆಸಲು ಅನುಮತಿಸಲಾಗುವುದು. ಅರ್ಧ ಗಂಟೆ ಕಾಲಾವಧಿಯ ಸೂಚನಾಪತ್ರವನ್ನು ಮೂರು ದಿನ ಮುಂಚಿತವಾಗಿಯೇ ಕಾರ್ಯದರ್ಶಿಯವರಿಗೆ ನೀಡತಕ್ಕದ್ದು)***

## 3. ಶೂನ್ಯ ವೇಳೆ
## (ನಿಯಮ 59ಎ, ಬಿ, ಸಿ ಮತ್ತು ಡಿ)

ಅಧಿವೇಶನದ ಅವಧಿಯಲ್ಲಿ ನಿಗದಿಪಡಿಸಿದ ಪ್ರತಿ ಉಪವೇಶನಗಳ ದಿನಗಳಲ್ಲಿ, ಉಪವೇಶನ ಮುಕ್ತಾಯಗೊಂಡ ಅವಧಿಯಿಂದ ಮರುದಿನದ ಉಪವೇಶನ ಪ್ರಾರಂಭಗೊಳ್ಳುವ ನಡುವಿನ ಅವಧಿಯಲ್ಲಿ ಸಂಭವಿಸಿದ ಸಾರ್ವಜನಿಕ ಮಹತ್ವವುಳ್ಳ ಯಾವುದೇ ಘಟನಾವಳಿಯನ್ನು ಸರ್ಕಾರದ ಗಮನಕ್ಕೆ ತರುವ ಸಲುವಾಗಿ ಶೂನ್ಯ ವೇಳೆಯ ಸೂಚನೆಗಳನ್ನು ನೀಡಲು ಶಾಸಕರಿಗೆ ಅವಕಾಶವಿರುತ್ತದೆ. ಒಂದು ದಿನಕ್ಕೆ ಒಂದು ಶೂನ್ಯ ವೇಳೆಯ ಸೂಚನೆಯನ್ನು ಮಾತ್ರ ನೀಡಲು ಅವಕಾಶವಿರುತ್ತದೆ.

### 4. ನಿಲುವಳಿ ಸೂಚನೆ

### (ನಿಯಮ 60)

ಭಾರತ ಸಂವಿಧಾನದ ಜವಾಬ್ದಾರಿ ಮತ್ತು ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಸರ್ಕಾರ ವಿಫಲವಾದ, ಸಾರ್ವಜನಿಕವಾಗಿ ಅತ್ಯಂತ ಮಹತ್ವದ ಮತ್ತು ಜರೂರಾದ ವಿಷಯಗಳನ್ನು ಮಾತ್ರ ನಿಲುವಳಿ ಸೂಚನೆಯ ರೂಪದಲ್ಲಿ ***(ಪ್ರಶ್ನೋತ್ತರ, ಶೂನ್ಯ ವೇಳೆ ಮತ್ತು ಕಾಗದ ಪತ್ರಗಳ ಮಂಡನೆಯ ತರುವಾಯ)*** ನೀಡಲು ಮಾನ್ಯ ಶಾಸಕರಿಗೆ ಅವಕಾಶವಿರುತ್ತದೆ.

### 5. ನಿಯಮ 69ರ ಸೂಚನೆಗಳು

ಇತ್ತೀಚೆಗೆ ಜರುಗಿದ, ಸಾರ್ವಜನಿಕ ಮಹತ್ವವುಳ್ಳ ವಿಷಯಗಳನ್ನು ಸದನದಲ್ಲಿ ಪ್ರಸ್ತಾಪಿಸುವ ಸಲುವಾಗಿ ಈ ನಿಯಮದಡಿ ಮಾನ್ಯ ಶಾಸಕರು ಸೂಚನೆಗಳನ್ನು ನೀಡಬಹುದಾಗಿರುತ್ತದೆ.

### 6. ಗಮನ ಸೆಳೆಯುವ ಸೂಚನೆಗಳು

### (ನಿಯಮ 73)

ಯಾವುದೇ ಸಾರ್ವಜನಿಕ ಹಿತದೃಷ್ಟಿಯ ಮಹತ್ವದ ವಿಷಯಗಳನ್ನು ಮಾನ್ಯ ಸಚಿವರ ಗಮನಕ್ಕೆ ತರಲಿಚ್ಛಿಸುವ ಸಲುವಾಗಿ ಮಾನ್ಯ ಶಾಸಕರು ಸೂಚನೆ ನೀಡಲು ಅವಕಾಶವಿರುತ್ತದೆ.

### 7. ಖಾಸಗಿ ಸದಸ್ಯರ ಕಾರ್ಯಕಲಾಪಗಳು

**ಖಾಸಗಿ ಸದಸ್ಯರ ವಿಧೇಯಕಗಳು:** ಖಾಸಗಿ ಸದಸ್ಯರ ವಿಧೇಯಕಗಳನ್ನು ನಿಯಮ 75(1) ಮತ್ತು (2)ರಡಿ ಮಾನ್ಯ ಸದಸ್ಯರು ಸದನದಲ್ಲಿ ಮಂಡಿಸಲು ಅವಕಾಶವಿರುತ್ತದೆ.

**ಖಾಸಗಿ ಸದಸ್ಯರ ನಿರ್ಣಯಗಳು:** ನಿಯಮ 32ರಡಿ ಸಾರ್ವಜನಿಕ ಹಿತದೃಷ್ಟಿಯ ಖಾಸಗಿ ಸದಸ್ಯರ ನಿರ್ಣಯವನ್ನು ಸದನದಲ್ಲಿ ಮಂಡಿಸಲು ಅವಕಾಶವಿರುತ್ತದೆ.

ಖಾಸಗಿ ಸದಸ್ಯರ ವಿಧೇಯಕಗಳು/ನಿರ್ಣಯಗಳಿಗೆ ಸಂಬಂಧಿಸಿದ ಸೂಚನಾ ಪತ್ರಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ಹಾಗೂ ಬ್ಯಾಲೆಟ್ ನಡೆಸುವ ದಿನಾಂಕಗಳ ವಿವರಗಳು ಕೆಳಕಂಡಂತಿವೆ:

| ಖಾಸಗಿ ಸದಸ್ಯರ ಕಾರ್ಯಕಲಾಪಗಳಿಗೆ ಗೊತ್ತುಪಡಿಸಿದ ದಿನಾಂಕ | ಖಾಸಗಿ ಸದಸ್ಯರ ವಿಧೇಯಕ ಮತ್ತು ನಿರ್ಣಯಗಳ ಸೂಚನಾ ಪತ್ರಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | ಖಾಸಗಿ ಸದಸ್ಯರ ವಿಧೇಯಕ ಮತ್ತು ನಿರ್ಣಯಗಳಿಗೆ ಬ್ಯಾಲೆಟ್ ನಡೆಸುವ ದಿನಾಂಕ | ಬ್ಯಾಲೆಟ್ ನಡೆಯುವ ಸ್ಥಳ ಮತ್ತು ಸಮಯ |
|---|---|---|---|
| 08.06.2017 (ಗುರುವಾರ) | 01.06.2017 (ಗುರುವಾರ) | 05.06.2017 (ಸೋಮವಾರ) | ಕಾರ್ಯದರ್ಶಿಯವರ ಕೊಠಡಿ, ಕೊಠಡಿ ಸಂಖ್ಯೆ.121, ಮೊದಲನೇ ಮಹಡಿ, ವಿಧಾನಸೌಧ ಮಧ್ಯಾಹ್ನ 3:00 ಗಂಟೆಗೆ |
| 15.06.2017 (ಗುರುವಾರ) | 06.06.2017 (ಮಂಗಳವಾರ) | 12.06.2017 (ಸೋಮವಾರ) | |

**8. ಅರ್ಜಿಗಳು**

**(ನಿಯಮ 136 ರಿಂದ 145)**

ನಿಯಮಗಳಲ್ಲಿ ತಿಳಿಸಿರುವ ಷರತ್ತಿಗೆ ಒಳಪಟ್ಟು ಸಾರ್ವಜನಿಕ ಹಿತದೃಷ್ಟಿಯ ನಾಗರೀಕರ ಅರ್ಜಿಗಳನ್ನು ಮೇಲು ರುಜುವಿನೊಂದಿಗೆ ಮಾನ್ಯ ಶಾಸಕರು ಸದನಕ್ಕೆ ಸಲ್ಲಿಸಲು ಅವಕಾಶವಿರುತ್ತದೆ.

**9. ನಿಯಮ 351ರ ಮೇರೆಗೆ ಸೂಚನೆ**

ಒಂದು ಕ್ರಿಯಾಲೋಪವಲ್ಲದಂತಹ ಯಾವ ವಿಷಯವನ್ನಾಗಲಿ ವಿಧಾನ ಸಭೆಯ ಗಮನಕ್ಕೆ ತರಬೇಕೆಂದು ಇಚ್ಛಿಸುವ ಸದಸ್ಯರು, ಕಾರಣಗಳನ್ನು ಸಂಕ್ಷಿಪ್ತವಾಗಿ ಲಿಖಿತ ಮೂಲಕ ಗೊತ್ತುಪಡಿಸಿದ ನಮೂನೆಯಲ್ಲಿ ಕಾರ್ಯದರ್ಶಿಯವರಿಗೆ ನೀಡಲು ಅವಕಾಶವಿರುತ್ತದೆ.

**ಕರ್ನಾಟಕ ವಿಧಾನ ಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಯ ನಿಯಮಾವಳಿಗಳಲ್ಲಿನ ಅವಕಾಶ ಮತ್ತು ಮಾನ್ಯ ಸಭಾಧ್ಯಕ್ಷರ ಅಪ್ಪಣೆ ಪಡೆದು, ಇನ್ನುಳಿದ ವಿಷಯಗಳನ್ನು ಚರ್ಚಿಸಲು/ಪ್ರಸ್ತಾಪಿಸಲು ಮಾನ್ಯ ಶಾಸಕರಿಗೆ ಅವಕಾಶವಿರುತ್ತದೆ.**

**ಅಡಕ: ಅನುಬಂಧ-1, 2, ಮತ್ತು 3.**

**ಎಸ್. ಮೂರ್ತಿ**
ಕಾರ್ಯದರ್ಶಿ (I/c)
ಕರ್ನಾಟಕ ವಿಧಾನ ಸಭೆ.

**ಇವರಿಗೆ:**

**ಕರ್ನಾಟಕ ವಿಧಾನ ಸಭೆಯ ಎಲ್ಲಾ ಮಾನ್ಯ ಸದಸ್ಯರು.**

**ವಿಶೇಷ ಸೂಚನೆ**

ಪ್ರಶ್ನೆಗಳು, ಅರ್ಧ ಗಂಟೆ ಕಾಲಾವಧಿ ಚರ್ಚೆ, ಗಮನ ಸೆಳೆಯುವ ಸೂಚನೆ, ನಿಯಮ 351ರ ಸೂಚನೆ, ಖಾಸಗಿ ವಿಧೇಯಕಗಳು/ನಿರ್ಣಯಗಳಿಗೆ ಸಂಬಂಧಿಸಿದ ಸೂಚನೆಗಳನ್ನು **ಪ್ರಶ್ನೆಗಳ ಶಾಖೆಯ (ಕೊಠಡಿ ಸಂಖ್ಯೆ:143, ಮೊದಲನೇ ಮಹಡಿ, ವಿಧಾನ ಸೌಧ)** ಹೊರಗಡೆ ಇಟ್ಟಿರುವ ಮರದ ಪೆಟ್ಟಿಗೆಯಲ್ಲಿ ಹಾಕತಕ್ಕದ್ದು.

**ಶೂನ್ಯ ವೇಳೆ, ನಿಲುವಳಿ ಸೂಚನೆ ಹಾಗೂ ನಿಯಮ 69ರ ಸೂಚನೆಗಳನ್ನು ಶಾಸನ ರಚನಾ ಶಾಖೆಯಲ್ಲಿ (ಕೊಠಡಿ ಸಂಖ್ಯೆ.128, ಮೊದಲನೇ ಮಹಡಿ ವಿಧಾನ ಸೌಧ) ನೀಡತಕ್ಕದ್ದು.**

ವಿಧಾನ ಸಭೆಯ ಪ್ರಶ್ನೆಗಳು ಮತ್ತಿತರ ಸೂಚನೆಗಳಿಗೆ ಸಂಬಂಧಿಸಿದ ಮಾಹಿತಿಯುಳ್ಳ ಈ ಲಘು ಪ್ರಕಟಣೆಯು **www.kla.kar.nic.in/assembly/lob/lob.htm** ಅಂತರ್ಜಾಲದಲ್ಲಿ ಲಭ್ಯವಿರುತ್ತದೆ.

## ಅನುಬಂಧ-1

ವಿಧಾನ ಸಭೆಯ ಮಾನ್ಯ ಸದಸ್ಯರು ಸೂಚನಾ ಪತ್ರಗಳನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡುವಂತೆ ಕೋರಲಾಗಿದೆ:

(ನಿಯಮ 47)

1. ಪ್ರಶ್ನೆಯು ಒಂದೇ ವಿಚಾರಕ್ಕೆ ಸಂಬಂಧಪಟ್ಟಿರತಕ್ಕದು;
2. ಅದು ಮಾಹಿತಿಯನ್ನು ಪಡೆದುಕೊಳ್ಳುವುದಕ್ಕಾಗಿ ಕೇವಲ ಒಂದು ಕೋರಿಕೆಯ ರೂಪದಲ್ಲಿರತಕ್ಕದ್ದು;
3. ಅದು ಸಂದಿಗ್ಧವಾಗಿಯಾಗಲೀ ಅಥವಾ ಅರ್ಥವಾಗದಂತೆಯಾಗಲಿ ಇರಕೂಡದು;
4. ಪ್ರಶ್ನೆಯನ್ನು ಅರ್ಥವಾಗುವಂತೆ ಮಾಡುವುದಕ್ಕೆ ಅವಶ್ಯಕವಾಗಿಲ್ಲದ ಯಾವ ಹೆಸರಾಗಲಿ ಅಥವಾ ಹೇಳಿಕೆಯಾಗಲಿ ಅದರಲ್ಲಿರತಕ್ಕುದಲ್ಲ;
5. ಅದು, ಒಂದು ಹೇಳಿಕೆಯನ್ನು ಒಳಗೊಂಡಿದ್ದಲ್ಲಿ, ಆ ಹೇಳಿಕೆಯ ಸತ್ಯಾಸತ್ಯತೆಯ ಬಗ್ಗೆ ಸದಸ್ಯರು ತಾವೇ ಜವಾಬ್ದಾರರಾಗಿರತಕ್ಕದ್ದು;
6. ಅದು, ಚರ್ಚೆಗಳನ್ನು ಅನುಮಾನಿತ ನಿರ್ಧಾರಗಳನ್ನು, ಅಣಕದ ಮಾತುಗಳನ್ನು, ದೋಷಾರೋಪಣೆಗಳನ್ನು ಶ್ಲಾಘನೆ, ವಿಶೇಷಣೆಗಳನ್ನು ಅಥವಾ ಅಪಮಾನ ಹಾನಿಕರ ಹೇಳಿಕೆಗಳನ್ನು ಒಳಗೊಂಡಿರತಕ್ಕುದಲ್ಲ;
7. ಅದರಲ್ಲಿ ಯಾವುದಾದರೂ ಒಂದು ವಿಚಾರದ ಮೇಲೆ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕೆಂದಾಗಲಿ ಅಥವಾ ಒಂದು ಜಟಿಲವಾದ ಕಾನೂನು ಸಂಬಂಧದ ವಿಚಾರಕ್ಕೆ ಅಥವಾ ಕಾಲ್ಪನಿಕ ವಿಚಾರಕ್ಕೆ ಪರಿಹಾರ ತಿಳಿಸಬೇಕೆಂದಾಗಲಿ ಕೇಳತಕ್ಕದಲ್ಲ.
8. ಅದರಲ್ಲಿ ಯಾವನಾದರೂ ವ್ಯಕ್ತಿಯ ಸರ್ಕಾರಿ ಕೆಲಸಕ್ಕೆ ಅಥವಾ ಅವನ ಸಾರ್ವಜನಿಕ ಕಾರ್ಯಗಳಿಗೆ ಸಂಬಂಧಿಸುವಷ್ಟರ ಮಟ್ಟಿಗೆ ಹೊರತು ಅವನ ನಡತೆಯ ವಿಚಾರದಲ್ಲಾಗಲಿ ಅಥವಾ ಶೀಲ ಸ್ವಭಾವಗಳ ವಿಚಾರದಲ್ಲಾಗಲಿ ಪ್ರಶ್ನೆಯನ್ನು ಕೇಳತಕ್ಕದಲ್ಲ;
9. ಅದು, ಸಾಮಾನ್ಯವಾಗಿ ನೂರೈವತ್ತು ಪದಗಳನ್ನು ಮೀರತಕ್ಕದಲ್ಲ;
10. ಸರ್ಕಾರಕ್ಕೆ ಸಂಬಂಧಪಡದ ಯಾವುದಾದರೂ ವಿಷಯದಲ್ಲಿ ಪ್ರಶ್ನೆಯನ್ನು ಕೇಳತಕ್ಕದಲ್ಲ;

11. ಯಾವ ಸಮಿತಿಯ ವರದಿಯನ್ನು ಸದನದ ಮುಂದೆ ಮಂಡಿಸಿಲ್ಲವೋ ಅಂತಹ ಸಮಿತಿಯ ನಡವಳಿಕೆಗಳ ವಿಚಾರವಾಗಿ ಯಾವ ಪ್ರಶ್ನೆಯನ್ನೂ ಕೇಳತಕ್ಕುದಲ್ಲ;
12. ಅದು, ವ್ಯಕ್ತಿ ಸಂಬಂಧವಾದ ದೂಷಣೆಯನ್ನು ಮಾಡಕೂಡದು ಅಥವಾ ಅಂತಹ ದೂಷಣೆಯು ಧ್ವನಿತಗೊಳ್ಳುವಂತಿರತಕ್ಕುದಲ್ಲ;
13. ಒಂದು ಪ್ರಶ್ನೆಗೆ ಕೊಡುವ ಉತ್ತರದ ಮಿತಿಗೆ ಒಳಪಡಿಸಲಾಗದೆ ಇರುವಂಥ ಬೃಹತ್ ಕಾರ್ಯನೀತಿಗೆ ಸಂಬಂಧಪಟ್ಟ ವಿಚಾರಣೆಗಳನ್ನು ಕುರಿತು ಪ್ರಶ್ನಿಸತಕ್ಕದಲ್ಲ;
14. ಮೊದಲೇ ಉತ್ತರ ಕೊಟ್ಟಿರುವ ಪ್ರಶ್ನೆಗಳಲ್ಲಿ ಅಥವಾ ಯಾವ ಪ್ರಶ್ನೆಗಳಿಗೆ ಉತ್ತರವನ್ನು ನಿರಾಕರಿಸಲಾಗಿದೆಯೋ ಅಂಥ ಪ್ರಶ್ನೆಗಳಲ್ಲಿ ಅಡಕವಾಗಿರುವ ಅಂಶಗಳನ್ನೇ ಕುರಿತು ಆ ಪ್ರಶ್ನೆಯನ್ನು ಪುನಃ ಕೇಳತಕ್ಕುದಲ್ಲ;
15. ಅದರಲ್ಲಿ ಕ್ಷುಲ್ಲಕ ವಿಷಯಗಳ ಬಗ್ಗೆ ವಿವರಗಳನ್ನು ಕೇಳತಕ್ಕದಲ್ಲ;
16. ಅದರಲ್ಲಿ ಸಾಮಾನ್ಯವಾಗಿ ಕಳೆದು ಹೋದ ವಿಚಾರವನ್ನು ಕುರಿತು ಯಾವ ವಿವರಣೆಗಳನ್ನು ಕೇಳತಕ್ಕದಲ್ಲ;
17. ಅದರಲ್ಲಿ, ಸುಲಭವಾಗಿ ದೊರೆಯುವ ಕಾಗದ ಪತ್ರಗಳಲ್ಲಿ ಅಥವಾ ಸಾಮಾನ್ಯ ಉಲ್ಲೇಖ ಗ್ರಂಥಗಳಲ್ಲಿ ನಮೂದಿಸಿರುವ ವಿವರಗಳನ್ನು ಕೇಳತಕ್ಕದಲ್ಲ;
18. ಅದರಲ್ಲಿ ರಾಜ್ಯ ಸರ್ಕಾರಕ್ಕೆ ಮುಖ್ಯವಾಗಿ ಜವಾಬ್ದಾರಿಯಾಗಿಲ್ಲದ ಸಂಸ್ಥೆಗಳ ಅಥವಾ ವ್ಯಕ್ತಿಗಳ ನಿಯಂತ್ರಣಕ್ಕೊಳಪಟ್ಟಿರುವ ವಿಷಯಗಳನ್ನು ಕುರಿತು ಪ್ರಶ್ನಿಸತಕ್ಕುದಲ್ಲ;
19. ಅದರಲ್ಲಿ ಭಾರತದ ಯಾವುದಾದರೂ ಭಾಗದಲ್ಲಿ ಅಧಿಕಾರ ವ್ಯಾಪ್ತಿಯುಳ್ಳ ಒಂದು ನ್ಯಾಯಾಲಯದವರು ವಿಚಾರಣೆ ನಡೆಸುತ್ತಿರುವ ವಿಷಯದ ಮೇಲೆ ಮಾಹಿತಿ ಪಡೆದುಕೊಳ್ಳುವುದಕ್ಕಾಗಿ ಪ್ರಶ್ನಿಸತಕ್ಕದಲ್ಲ;
20. ಅದರಲ್ಲಿ ಮಂತ್ರಿ ಮಂಡಲದಲ್ಲಿ ನಡೆಯುವ ಚರ್ಚೆಗಳು ಅಥವಾ ಯಾವ ವಿಷಯದ ಸಂಬಂಧದಲ್ಲಿ ಮಾಹಿತಿಯನ್ನು ಬಹಿರಂಗಗೊಳಿಸಕೂಡದೆಂಬುದಾಗಿ ಸಂವಿಧಾನಾತ್ಮಕ, ಶಾಸನಾತ್ಮಕ ಅಥವಾ ಸಾಂಪ್ರದಾಯಕವಾದ ಹೊಣೆಗಾರಿಕೆ ಇರುವುದೋ ಅಂಥ ವಿಷಯದ ಸಂಬಂಧದಲ್ಲಿ ರಾಜ್ಯಪಾಲರಿಗೆ ನೀಡಿರುವ ಸಲಹೆಗಳ ಬಗ್ಗೆ ಮಾಹಿತಿಯನ್ನು ಕೇಳತಕ್ಕದಲ್ಲ;
21. ಅದರಲ್ಲಿ ನ್ಯಾಯಿಕ ಅಥವಾ ಅರೆನ್ಯಾಯಿಕ ಕರ್ತವ್ಯಗಳನ್ನು ನಿರ್ವಹಿಸುತ್ತಿರುವ ಯಾವುದೇ ಶಾಸನಬದ್ಧ ನ್ಯಾಯಾಧೀಕರಣ ಅಥವಾ ಶಾಸನಬದ್ಧ ಅಧಿಕಾರ ವರ್ಗದವರ ಮುಂದೆ ಅಥವಾ ಯಾವುದೇ ವಿಷಯದ ವಿಚಾರಣೆ ಅಥವಾ ತನಿಖೆ ನಡೆಸಲು ನೇಮಕಗೊಂಡ ಯಾವುದೇ

ಆಯೋಗ ಅಥವಾ ವಿಚಾರಣಾ ನ್ಯಾಯಾಲಯದ ಮುಂದೆ ಇತ್ಯರ್ಥವಾಗದೆ ಉಳಿದಿರುವ ವಿಷಯಗಳ ಬಗ್ಗೆ ಸಾಮಾನ್ಯವಾಗಿ ಪ್ರಶ್ನಿಸತಕ್ಕುದಲ್ಲ. ಆದರೆ, ನ್ಯಾಯಾಧೀಕರಣ ಅಥವಾ ಸಮಿತಿ ಅಥವಾ ವಿಚಾರಣಾ ನ್ಯಾಯಾಲಯವು ಆ ವಿಷಯವನ್ನು ಪರಿಶೀಲಿಸುವುದಕ್ಕೆ ಬಾಧಕವುಂಟಾಗುವ ಸಂಭವವಿಲ್ಲದಿರುವ ಪಕ್ಷದಲ್ಲಿ, ಕಾರ್ಯವಿಧಾನ ಅಥವಾ ವಿಚಾರಣೆ ಹಂತಕ್ಕೆ ಸಂಬಂಧಿಸಿದ ವಿಷಯಗಳನ್ನು ಉಲ್ಲೇಖಿಸಬಹುದು;

22. ಅದರಲ್ಲಿ, ಅತೀ ಜರೂರು ಪ್ರಾಮುಖ್ಯತೆಯುಳ್ಳ ವಿಷಯದ ಸಂಬಂಧದಲ್ಲಿ ಸರ್ಕಾರದ ಉದ್ದೇಶಗಳ ಬಗ್ಗೆ ಸ್ಪಷ್ಟೀಕರಣವನ್ನು ಕೇಳಬಹುದು. ಆದರೆ, ಒಟ್ಟಿನಲ್ಲಿ ಪ್ರಶ್ನೆಯನ್ನು ಕೇಳುವ ಸದಸ್ಯರು ತಮ್ಮ ಪ್ರಶ್ನೆಯಲ್ಲಿ ಕೇಳಿದ ವಿಷಯ ಕೈಗೊಂಡ ಯಾವುದೇ ನಿರ್ದಿಷ್ಟ ಕ್ರಮದ ಬಗ್ಗೆ ಅದು ಸಲಹೆ ಆಗಿರಬಾರದು;

*****

# ಅನುಬಂಧ-2

ಈ ಕೆಳಗೆ ನಮೂದಿಸಲಾಗಿರುವ ಸೂಚನೆಗಳನ್ನು ಪಾಲಿಸದೆ ಅಪೂರ್ಣಗೊಳಿಸಿರುವ ಪ್ರಶ್ನೆಗಳು/ಗಮನ ಸೆಳೆಯುವ ಹಾಗೂ ನಿಯಮ 351ರ ಸೂಚನೆಗಳನ್ನು ಪರಿಗಣಿಸಲಾಗುವುದಿಲ್ಲ;

1) ಸೂಚನೆಯಲ್ಲಿ ಸಹಿ ಮಾಡದಿರುವುದು.
2) ಸಂಕ್ಷಿಪ್ತ ವಿಷಯ ಬರೆಯದಿರುವುದು.
3) ಸೂಚನಾ ಪತ್ರದ ದಿನಾಂಕ ನಮೂದಿಸದಿರುವುದು.
4) ಉತ್ತರ ನೀಡಬೇಕಾದ ದಿನಾಂಕ ತಿಳಿಸದಿರುವುದು.
5) ಪ್ರಶ್ನೆಗೆ ಆದ್ಯತೆ ಸಂಖ್ಯೆಯನ್ನು ನೀಡದಿರುವುದು.
6) ಸಮೂಹ ಗುರುತುಪಡಿಸದಿರುವುದು.
7) ಪ್ರಶ್ನೆ/ಸೂಚನೆಗೆ ಉತ್ತರ ನೀಡಲಿರುವ ಸಚಿವರ ಖಾತೆ ನಮೂದಿಸದಿರುವುದು.
8) ಪ್ರಶ್ನೆಯನ್ನು ಓದಲು, ಸ್ಪಷ್ಟವಾಗಿ ಅರ್ಥವಾಗುವಂತೆ ಬರೆಯದಿರುವುದು.
9) ಪ್ರಶ್ನೆಯನ್ನು ಬೆರಳಚ್ಚು ಮಾಡಿ ಸಲ್ಲಿಸದಿರುವುದು.
10) ಪ್ರಶ್ನೆಯು ಒಂದೇ ಇಲಾಖೆಗೆ ಸಂಬಂಧಿಸಿದ್ದರೂ ಎರಡು ಅಥವಾ ಹೆಚ್ಚು ವಿಷಯಗಳಿಗೆ ಸಂಬಂಧಿಸಿರುವುದು.
11) ಒಂದೇ ಸೂಚನೆಯಲ್ಲಿ ಎರಡು ಇಲಾಖೆಗಳಿಗೆ ಸಂಬಂಧಿಸಿದ ಪ್ರಶ್ನೆ ನೀಡಿರುವುದು.
12) ಮೂರು ವರ್ಷಗಳ ಮೇಲ್ಪಟ್ಟು ಮಾಹಿತಿ ಕೇಳಲಾಗಿರುವುದು.
13) ಸೂಚನೆ ನೀಡಲು ಸಮಯಾವಕಾಶ ಮುಕ್ತಾಯವಾಗಿರುವುದು.
14) ಹೆಚ್ಚುವರಿ ಸೂಚನೆಗಳನ್ನು ನೀಡಿದ ಕಾರಣ ಹಿಂತಿರುಗಿಸಿರುವುದು.
15) ವಿಷಯವು ಸ್ಪಷ್ಟವಾಗಿಲ್ಲದಿರುವುದು.
16) ಮತಕ್ಷೇತ್ರ ನಮೂದಿಸದಿರುವುದು.

*****

# ಅನುಬಂಧ-3

**ದಿನಾಂಕ:05.06.2017 ರಿಂದ 16.06.2017ರವರೆಗಿನ ಉಪವೇಶನಗಳಲ್ಲಿ ಪ್ರಶ್ನೆಗಳಿಗೆ ಉತ್ತರಿಸಬೇಕಾದ ದಿನಗಳು ಮತ್ತು ಸಚಿವರು / ಇಲಾಖೆಗಳ ಸಮೂಹಗಳು ಈ ಕೆಳಕಂಡಂತಿದೆ:**

## ಸಮೂಹ ಅ-A

| ಪ್ರಶ್ನೆಗಳಿಗೆ ಉತ್ತರ ನೀಡುವ ದಿನಾಂಕ | ಸಂಬಂಧಪಟ್ಟ ಮಂತ್ರಿಗಳು | ಇಲಾಖೆಗಳು |
|---|---|---|
| **05 ಮತ್ತು 12ನೇ ಜೂನ್ 2017** | **ಅರಣ್ಯ ಸಚಿವರು** | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ |
| | **ಕಂದಾಯ ಸಚಿವರು** | ಕಂದಾಯ ಇಲಾಖೆಯಿಂದ ಮುಜರಾಯಿ ಹೊರತುಪಡಿಸಿ **ಕಂದಾಯ** |
| | **ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರು** | ಜಲಸಂಪನ್ಮೂಲ ಇಲಾಖೆಯಿಂದ **ಭಾರಿ ಮತ್ತು ಮಧ್ಯಮ ನೀರಾವರಿ** |
| | **ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಸಣ್ಣ ನೀರಾವರಿ ಸಚಿವರು** | 1. ಕಾನೂನು ಇಲಾಖೆ<br>2. ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ<br>3. ಜಲಸಂಪನ್ಮೂಲ ಇಲಾಖೆಯಿಂದ **ಸಣ್ಣ ನೀರಾವರಿ** |
| | **ಕಾರ್ಮಿಕ ಸಚಿವರು** | ಕಾರ್ಮಿಕ ಇಲಾಖೆ |
| | **ಜವಳಿ ಹಾಗೂ ಮುಜರಾಯಿ ರಾಜ್ಯ ಸಚಿವರು** | 1. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ **ಜವಳಿ**<br>2. ಕಂದಾಯ ಇಲಾಖೆಯಿಂದ **ಮುಜರಾಯಿ** |
| | **ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಮೀನುಗಾರಿಕೆ ರಾಜ್ಯ ಸಚಿವರು** | 1. ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ<br>2. ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯಿಂದ **ಮೀನುಗಾರಿಕೆ** |

# ಸಮೂಹ ಆ-B

| ಪ್ರಶ್ನೆಗಳಿಗೆ ಉತ್ತರ ನೀಡುವ ದಿನಾಂಕ | ಸಂಬಂಧಪಟ್ಟ ಮಂತ್ರಿಗಳು | ಇಲಾಖೆಗಳು |
|---|---|---|
| **06 ಮತ್ತು 13ನೇ ಜೂನ್ 2017** | **ಮುಖ್ಯಮಂತ್ರಿಗಳು** | 1. ಸಂಪುಟ ವ್ಯವಹಾರಗಳ ಇಲಾಖೆ<br>2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ<br>3. ಸಾಂಸ್ಥಿಕ ಹಣಕಾಸು, ಅಬಕಾರಿ, ಸಣ್ಣ ಉಳಿತಾಯ ಮತ್ತು ಲಾಟರಿ ಒಳಗೊಂಡಂತೆ ಆರ್ಥಿಕ<br>4. ಒಳಾಡಳಿತ ಇಲಾಖೆಯಿಂದ **ಗುಪ್ತ ದಳ**<br>5. ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಿಂದ **ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ**<br>6. ಸಹಕಾರ ಇಲಾಖೆಯಿಂದ ಕೃಷಿ ಮಾರುಕಟ್ಟೆ ಹೊರತುಪಡಿಸಿ **ಸಹಕಾರ**<br>7. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ **ಸಕ್ಕರೆ**<br>8. ಕೌಶಲ್ಯ ಅಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ<br>9. ಹಂಚಿಕೆಯಾಗದ ಇತರೆ ಖಾತೆಗಳು |
| | **ಗೃಹ ಸಚಿವರು** | ಒಳಾಡಳಿತ ಇಲಾಖೆಯಿಂದ ಗುಪ್ತದಳ ಹೊರತುಪಡಿಸಿ **ಒಳಾಡಳಿತ** |
| | **ಬೆಂಗಳೂರು ಅಭಿವೃದ್ಧಿ ಮತ್ತು ನಗರ ಯೋಜನಾ ಸಚಿವರು** | **ನಗರಾಭಿವೃದ್ಧಿ ಇಲಾಖೆಯಿಂದ**<br>(i) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ<br>(ii) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ<br>(iii) ಬೆಂಗಳೂರು ನೀರು ಸರಬರಾಜು ಮತ್ತು |

| | | |
|---|---|---|
| | | ಒಳಚರಂಡಿ ಮಂಡಳಿ<br>(iv) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ<br>(v) ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತ ಹಾಗೂ<br>(vi) ನಗರ ಯೋಜನಾ ನಿರ್ದೇಶನಾಲಯ ಒಳಗೊಂಡಂತೆ ಬೆಂಗಳೂರು ನಗರಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳು |
| | **ನಗರಾಭಿವೃದ್ಧಿ ಮತ್ತು ಹಜ್ ಸಚಿವರು** | 1. ನಗರಾಭಿವೃದ್ಧಿ ಇಲಾಖೆಯಿಂದ<br><br>(1) ಮಹಾನಗರ ಪಾಲಿಕೆಗಳು (ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಬೆಂಗಳೂರು ನಗರಕ್ಕೆ ಸಂಬಂಧಿಸಿದ ವಿಷಯಗಳನ್ನು ಹೊರತುಪಡಿಸಿ)<br>(ii) ನಗರಾಭಿವೃದ್ಧಿ ಪ್ರಾಧಿಕಾರಗಳು (ಬೆಂಗಳೂರು ನಗರಕ್ಕೆ ಸಂಬಂಧಿಸಿದ ವಿಷಯಗಳನ್ನು ಹೊರತುಪಡಿಸಿ)<br>(iii) ನಗರ ಭೂ ಸಾರಿಗೆ ನಿರ್ದೇಶನಾಲಯ<br>(iv) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ<br>(v) ಕರ್ನಾಟಕ ನಗರ ಮೂಲಭೂತ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮ ನಿಯಮಿತ (KUIDFC)<br><br>**2.** ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆಯಿಂದ **ಹಜ್** |

# ಸಮೂಹ ಇ-C

| ಪ್ರಶ್ನೆಗಳಿಗೆ ಉತ್ತರ ನೀಡುವ ದಿನಾಂಕ | ಸಂಬಂಧಪಟ್ಟ ಮಂತ್ರಿಗಳು | ಇಲಾಖೆಗಳು |
|---|---|---|
| 07 ಮತ್ತು 14ನೇ ಜೂನ್ 2017 | ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಮೂಲಭೂತ ಸೌಲಭ್ಯ ಅಭಿವೃದ್ಧಿ ಸಚಿವರು | 1. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ ಬೃಹತ್ ಮತ್ತು ಮಧ್ಯಮ ಕೈಗಾರಿಕೆ<br>2. ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆ |
| | ಸಣ್ಣ ಕೈಗಾರಿಕೆ ಸಚಿವರು | ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಿಂದ ಸಣ್ಣ ಕೈಗಾರಿಕೆಗಳು |
| | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ |
| | ಉನ್ನತ ಶಿಕ್ಷಣ ಸಚಿವರು | ಶಿಕ್ಷಣ ಇಲಾಖೆಯಿಂದ ಉನ್ನತ ಶಿಕ್ಷಣ |
| | ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರು | 1. ಶಿಕ್ಷಣ ಇಲಾಖೆಯಿಂದ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ<br>2. ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆಯಿಂದ ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ |
| | ಸಾರಿಗೆ ಸಚಿವರು | ಸಾರಿಗೆ ಇಲಾಖೆ |
| | ವಸತಿ ಸಚಿವರು | ವಸತಿ ಇಲಾಖೆ |
| | ಗಣಿ ಮತ್ತು ಭೂ ವಿಜ್ಞಾನ ಸಚಿವರು | ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಿಂದ ಗಣಿ ಮತ್ತು ಭೂವಿಜ್ಞಾನ |

# ಸಮೂಹ ಈ-D

| ಪ್ರಶ್ನೆಗಳಿಗೆ ಉತ್ತರ ನೀಡುವ ದಿನಾಂಕ | ಸಂಬಂಧಪಟ್ಟ ಮಂತ್ರಿಗಳು | ಇಲಾಖೆಗಳು |
|---|---|---|
| 08 ಮತ್ತು 15ನೇ ಜೂನ್ 2017 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ |
| | ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು | 1. ಸಮಾಜ ಕಲ್ಯಾಣ ಇಲಾಖೆ<br>2. ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |
| | ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕ ವ್ಯವಹಾರಗಳ ಸಚಿವರು | ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕ ವ್ಯವಹಾರಗಳ ಇಲಾಖೆ |
| | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು | 1. ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ<br>2. ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಿಂದ **ಕನ್ನಡ ಮತ್ತು ಸಂಸ್ಕೃತಿ** |
| | ವೈದ್ಯಕೀಯ ಶಿಕ್ಷಣ ಸಚಿವರು | ವೈದ್ಯಕೀಯ ಶಿಕ್ಷಣ ಇಲಾಖೆ |
| | ಯೋಜನೆ ಮತ್ತು ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು | 1. ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ<br>2. ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಿಂದ **ವಿಜ್ಞಾನ ಮತ್ತು ತಂತ್ರಜ್ಞಾನ** |
| | ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ಪ್ರವಾಸೋದ್ಯಮ ರಾಜ್ಯ ಸಚಿವರು | 1. ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಿಂದ **ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ**<br>2. ಪ್ರವಾಸೋದ್ಯಮ ಇಲಾಖೆ |

# ಸಮೂಹ ಉ-E

| ಪ್ರಶ್ನೆಗಳಿಗೆ ಉತ್ತರ ನೀಡುವ ದಿನಾಂಕ | ಸಂಬಂಧಪಟ್ಟ ಮಂತ್ರಿಗಳು | ಇಲಾಖೆಗಳು |
|---|---|---|
| **09 ಮತ್ತು 16ನೇ ಜೂನ್ 2017** | **ಇಂಧನ ಸಚಿವರು** | ಇಂಧನ ಇಲಾಖೆ |
| | **ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು** | ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ |
| | **ಕೃಷಿ ಸಚಿವರು** | ಕೃಷಿ ಇಲಾಖೆ |
| | **ಪಶುಸಂಗೋಪನೆ ಮತ್ತು ರೇಷ್ಮೆ ಸಚಿವರು** | 1. ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯಿಂದ **ಪಶುಸಂಗೋಪನೆ**<br>2. ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆಯಿಂದ **ರೇಷ್ಮೆ** |
| | **ಕೃಷಿ ಮಾರುಕಟ್ಟೆ ಮತ್ತು ತೋಟಗಾರಿಕೆ ಸಚಿವರು** | 1. ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆಯಿಂದ ರೇಷ್ಮೆ ಹೊರತುಪಡಿಸಿ **ತೋಟಗಾರಿಕೆ**<br>2. ಸಹಕಾರ ಇಲಾಖೆಯಿಂದ **ಕೃಷಿ ಮಾರುಕಟ್ಟೆ** |
| | **ಪೌರಾಡಳಿತ, ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ಉದ್ದಿಮೆಗಳ ರಾಜ್ಯ ಸಚಿವರು** | 1. ನಗರಾಭಿವೃದ್ಧಿ ಇಲಾಖೆಯಿಂದ ಪುರಸಭೆ ಮತ್ತು ಸ್ಥಳೀಯ ಸಂಸ್ಥೆಗಳು (ನಗರಸಭೆಗಳು, ಪುರಸಭೆಗಳು ಮತ್ತು ಪಟ್ಟಣ ಪಂಚಾಯಿತಿಗಳು)<br>2. ಸಾರ್ವಜನಿಕ ಉದ್ದಿಮೆಗಳ ಇಲಾಖೆ |